


# ಜ್ಯೋತಿಷ ಮಿತ್ರ

## ಆನ್ಲೈನ್ ದಿನಪತ್ರಿಕೆ

www.jyothishamithra.com

ಸಂಚಿಕೆ : 1435 02-08-2022 ಮಂಗಳವಾರ

ಶುಭಕೃತ್ ಸಂವತ್ಸರ ದಕ್ಷಿಣಾಯನ ವರ್ಷಋತು
ಶ್ರಾವಣಮಾಸ ಶುಕ್ಲಪಕ್ಷ

## ನಿತ್ಯ ಪಂಚಾಂಗ

ತಿಥಿ : ಪಂಚಮೀ(29:41) ನಕ್ಷತ್ರ : ಉತ್ತರಾ(17:28)

ರಾಹುಕಾಲ : 03:46 PM - 05:21 PM

ಗುಳಿಕಕಾಲ : 12:36 PM - 02:11 PM

## ಸುಜ್ಞಾನ

ಸಹಾಯ ಮಾಡಿದವರನ್ನು ಮರೆಯಬೇಡಿ, ಪ್ರೀತಿಸಿದವರನ್ನು ದ್ವೇಷಿಸಬೇಡಿ, ನಂಬಿದವರಿಗೆ ಮೋಸ ಮಾಡಬೇಡಿ... ಇದುವೇ ಬದುಕಿನ ಸರಳ ಸೂತ್ರ...



# ನಾಗರ ಪಂಚಮಿಯಂದು ನಾಗನ ಕಲ್ಲುಗಳಿಗೆ ಕ್ಷೀರಾಭಿಷೇಕ ಮಾಡುವುದು ಯಾಕೆ ಗೊತ್ತಾ?

“ಅನಂತಂ ವಾಸುಕಿಂ ಶೇಷಂ ಪದ್ಮನಾಭಂ ಚ

ಕಂಬಲಮ್| ಶಂಖಪಾಲಂ ಧೃತರಾಷ್ಟ್ರಂ ತಕ್ಷಕಂ,

ಕಾಲಿಯಂ ತಥಾ”

ಎಂಬ ಶ್ಲೋಕವು ನಾಗ ದೇವನ ವಿವಿಧ ಹೆಸರುಗಳನ್ನು ಹೇಳುತ್ತದೆ. ಅನಂತ, ವಾಸುಕೀ, ಶೇಷ, ಪದ್ಮನಾಭ, ಕಂಬಲ, ಶಂಖಪಾಲ, ಧೃತರಾಷ್ಟ್ರ, ತಕ್ಷಕ ಮತ್ತು ಕಾಲಿಯಾ ಹೀಗೆ ಒಂಭತ್ತು ಜಾತಿಯ ನಾಗಗಳ ಆರಾಧನೆ ಮಾಡಲಾಗುತ್ತದೆ. ಸರ್ಪಭಯ ಮತ್ತು ವಿಷದಿಂದ ತೊಂದರೆಯಾಗದೇ ಇರಲು ಹಲವು ಕಡೆ ನಾಗನ ಕಲ್ಲುಗಳಿಗೆ ಕ್ಷೀರಾಭಿಷೇಕ ಮಾಡುವ ಪದ್ಧತಿಯಿದೆ.

ನಾಗರಪಂಚಮಿಯ ದಿನದಲ್ಲಿ ವಾತಾವರಣವು ಸ್ಥಿರವಾಗಿರುತ್ತದೆ. ಸಾತ್ವಿಕತೆಯನ್ನು ಗ್ರಹಿಸಲು ಈ ಕಾಲವು ಅತ್ಯಂತ ಯೋಗ್ಯ ಮತ್ತು ಬಹಳ ಉಪಯುಕ್ತವಾಗಿದೆ. ಶ್ರಾವಣ ಶುದ್ಧ ಪಂಚಮಿಯ ದಿನ, ಗೋಮಯ (ಸಗಣಿ)ಯಿಂದ ಬಾಗಿಲು ಸಾರಿಸಿ, ರಂಗೋಲಿ, ಇಲ್ಲವೇ ಅರಿಶಿಣ, ಕುಂಕುಮದಿಂದ ನಾಗರ ಚಿತ್ರಗಳನ್ನು ಬರೆದು ನೇಮನಿಷ್ಠೆಯಿಂದ ಪೂಜೆ ಮಾಡುತ್ತಾರೆ.




ಉತ್ತರಾ ನಕ್ಷತ್ರಕ್ಕೆ ಅಧಿಪತಿ ರವಿಗ್ರಹ. ಉತ್ತರಾ ನಕ್ಷತ್ರದಲ್ಲಿ ಹುಟ್ಟಿದವರು ನ್ಯಾಯವನ್ನು ಪರಿಪಾಲಿಸಿ ಜೀವಿಸುವವರು. ಧನಿಕರು, ಶ್ರೇಷ್ಠ ಶ್ರೇಣಿಯ ಅಧಿಕಾರಿಗಳೂ ಆಗುತ್ತಾರೆ. ಈ ನಕ್ಷತ್ರಕ್ಕೆ ರವಿಗ್ರಹ ಅಧಿಪತಿಯಾಗಿರುವುದರಿಂದ ಆತ್ಮಜ್ಞಾನದ ತಿಳುವಳಿಕೆ

ಹೆಚ್ಚಾಗಿರುವುದು. ತಂತ್ರಜ್ಞಾನ, ಸಾಹಿತ್ಯ-ಸಂಸ್ಕೃತಿ-ಸಂಗೀತಕಲಾ ಶಾಸ್ತ್ರಗಳಲ್ಲಿ ಪ್ರೌಢಿಮೆ ಸಾಧಿಸುತ್ತಾರೆ. ಇವರ ವಿದ್ಯೆಯು ಅಪೂರ್ಣವಾಗಿ ಉಪಯೋಗಿಸಲ್ಪಡುವುದರಿಂದ ಸಂಶೋಧನೆ ಹಾಗೂ ವಿಶ್ಲೇಷಣೆಗಳಿಂದ ಬಹಳ ಹಿಂದೆ ಸಾಗುವರು. ಇವರು ಅಧ್ಯಾತ್ಮಿಕ ಜ್ಞಾನದಲ್ಲಿ ವಿಶೇಷ ಪರಿಣತಿ ಸಾಧಿಸಿ, ಧರ್ಮ- ನ್ಯಾಯ - ನೀತಿಗಳಿಂದ ಜೀವನ ನಡೆಸುತ್ತಾರೆ. ಕಂಪ್ಯೂಟರ್, ಗಣಿತ ವಿಷಯಗಳಲ್ಲಿ ಇವರು ಯಶಸ್ವಿಯಾಗಿ ಕಾರ್ಯ ನಿರ್ವಹಿಸಲು ಸಮರ್ಥರು. ಇವರಿಗೆ ಕಳತ್ರ-ಪುತ್ರರಿಂದ ಅಸಾಧ್ಯ ನೋವು ಯಾತನೆಗಳು ಪ್ರಾಪ್ತವಾಗುತ್ತವೆ. ಆದರೆ ಇವರು ದೈವೀಕ ಶಕ್ತಿಯಿಂದ ಇವುಗಳಿಗೆ ತಲೆಬಾಗದೇ ಆಧ್ಯಾತ್ಮಿಕ ಜೀವನವನ್ನು ನಡೆಸಿ ಕೃತಾರ್ಥರಾಗುವರು.

# ಪುರಾಣಗಳ ಪ್ರಕಾರ ಕುಜಗ್ರಹ



ಶಿವಪುರಾಣದಂತೆ ಒಮ್ಮೆ ಶಿವ ತೀವ್ರ ತಪಸ್ಸಿನಲ್ಲಿ ತೊಡಗಿದ್ದಾಗ ಅವನ ಹಣೆಯಿಂದ ಮೂರು ಹನಿ ಬೆವರು ಭೂಮಿಯಲ್ಲಿ ಬೀಳುತ್ತದೆ. ಇದರಿಂದ ಒಂದು ಸುಂದರ ಬಾಲಕ ಹುಟ್ಟುತ್ತಾನೆ. ಇವನಿಗೆ ಕೆಂಪುಬಣ್ಣ, ನಾಲ್ಕು

ಕೈಗಳಿರುತ್ತವೆ. ಶಿವ ನಂತರ ಈ ಬಾಲಕನನ್ನು ಪಾಲಿಸಲು ಭೂದೇವಿಗೆ ಒಪ್ಪಿಸುತ್ತಾನೆ. ಅವನಿಗೆ ಭೌಮ ಎಂದು ಹೆಸರಿಸಲಾಗುತ್ತದೆ. ಭೌಮ ಬೆಳೆದು ದೊಡ್ಡವನಾದಾಗ ಕಾಶಿಗೆ ಹೋಗಿ ತೀವ್ರ ತಪಸ್ಸುಮಾಡಿ ಶಿವನನ್ನು ಒಲಿಸಿಕೊಳ್ಳುತ್ತಾನೆ. ಶಿವ ಅವನ ತಪಸ್ಸಿಗೆ ಮೆಚ್ಚಿ ಅವನಿಗೆ ಮಂಗಳ ಲೋಕವನ್ನು ದಯಪಾಲಿಸುತ್ತಾನೆ. ಅದರಿಂದ ಇವನು ಮಂಗಳ ಎಂದು ಪ್ರಸಿದ್ಧನಾಗುತ್ತಾನೆ.

ಮಂಗಳ ಅವಂತಿ ದೇಶದಲ್ಲಿ , ಅಕ್ಷಯ ಸಂವತ್ಸರದ ಶ್ರಾವಣ ಶುಕ್ಲ ತ್ರಯೋದಶಿಯಂದು, ಪೂರ್ವಾಷಾಡ ನಕ್ಷತ್ರದಲ್ಲಿ, ಭಾರದ್ವಾಜ ಗೋತ್ರದಲ್ಲಿ ನಾಲ್ಕು ಕೈ, ಕೆಂಪುಬಣ್ಣದ ಮಗುವಾಗಿ ಜನಿಸಿದ ಎನ್ನುತ್ತಾರೆ. ಗ್ರಹಮಂಡಲದಲ್ಲಿ ಇವನಿಗೆ ದಕ್ಷಿಣದಲ್ಲಿ ಸ್ಥಾನ ಕಲ್ಪಿಸಲಾಗಿದೆ. ಕಾರ್ತಿಕೇಯ ಇವನ ಅಧಿದೇವತೆ ಎಂದು ಗುರುತಿಸಲಾಗಿದೆ.

ಗಣೇಶ ಪುರಾಣದಂತೆ ಹಿರಣ್ಯಾಕ್ಷ ಭೂಮಿಯನ್ನು ಕದ್ದೊಯ್ದು ನೀರಿನಲ್ಲಿ ಅಡಗಿಸಿಟ್ಟಾಗ ವಿಷ್ಣು ವರಾಹ ಅವತಾರದಲ್ಲಿ ಬಂದು ಅವಳನ್ನು ಮೇಲೆ ಎತ್ತುತ್ತಾನೆ.



ಆಗ ಭೂಮಿ ಅವನನ್ನು ಮದುವೆಯಾಗಲು ಇಚ್ಛಿಸುತ್ತಾಳೆ. ಆಗ ವಿಷ್ಣು ಸುಂದರ ರೂಪ ತಳೆದು ಅವಳೊಡನೆ ಒಂದು ವರ್ಷ ಸಂಸಾರ ನಡೆಸುತ್ತಾನೆ. ಆಗ ಭೂಮಿಗೆ ಜನಿಸಿದ ಬಾಲಕನೇ ಮಂಗಳ.

## ಜ್ಯೋತಿಷ ಮಿತ್ರ ಆನ್ಲೈನ್ ದಿನಪತ್ರಿಕೆ

ಗೌರವ ಸಂಪಾದಕರು : ಜೀವನ್ ಉಳ್ಳಾಲ್

ಸಂಪಾದಕರು : ಶ್ರೀಷ ಎಸ್.



ಕಚೇರಿ ವಿಳಾಸ : ಹತ್ವಾರ್ ಕಾಂಪ್ಲೆಕ್ಸ್, ಹೊಸಬೆಟ್ಟು, ಮಂಗಳೂರು - 575019.

PH : 9986671473 / 9535283535

jmonline@gmail.com www.jyothishamithra.com